ಸಂಸ್ಥಾಪಕರು: ಪ್ರೊ ಎಂ.ವಿ. ಸೀತಾರಾಮಯ್ಯ



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಸಂಪುಟ: ೦೨ ಸಂಚಿಕೆ: ೦೬
Vol. 02 Issue 06

ಸೆಪ್ಟೆಂಬರ್ ೨೦೧೫
September 2015

ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್
Editor : Sri. B.R. Ravindranath



**ಚಂದಾ ವಿವರಗಳು**

**ವಾರ್ಷಿಕ ಚಂದಾ**
**ರೂ. ೨೦/–**
**ಐದು ವರ್ಷಗಳ ಚಂದಾ**
**ರೂ. ೧೦೦/–**

ವಿಳಾಸ

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
**ಸ್ಥಾಪನೆ : ೦೬–೦೫–೧೯೭೯**
**ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ**
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೪೮೮, ೨೬೬೮೬೮೮೩
ಇಮೇಲ್ : bmsritrust@gmail.com

**ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಆಗಸ್ಟ್ 2015 ತಿಂಗಳಿನಲ್ಲಿ ನಡೆದ ಕಾರ್ಯಕ್ರಮಗಳು**

## 'ಅಕ್ಕರ ಗೊಟ್ಟಿ' (ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ)

ಅಕ್ಕರಗೊಟ್ಟಿ ಕಾರ್ಯಕ್ರಮ–3
(8 ಆಗಸ್ಟ್ 2015 ಶನಿವಾರ)
ಸಂಜೆ 5:30 ರಿಂದ 7:30 ಶಾ. ಬಾಲೂರಾವ್ ಮಾತಿನ ಮಂಟಪ
ವಿಷಯ : ಹರಿಶ್ಚಂದ್ರ ಕಾವ್ಯದ ಪದ್ಯಗಳ ಆಶಯ
ಮಂಡನೆ: ಡಾ. ವಿಜಯಾ ಸುಬ್ಬರಾಜ್

ಬಿ.ಎಂ.ಶ್ರೀ ಪ್ರತಿಷ್ಠಾನವು ನಿರಂತರವಾಗಿ ನಡೆಸಿಕೊಂಡು ಬರುತ್ತಿರುವ ಅಕ್ಕರಗೊಟ್ಟಿ ಕಾರ್ಯಕ್ರಮ ತನ್ನದೇ ಆದ ರಿತಿಯಲ್ಲಿ ವಿಶಿಷ್ಟವಾಗಿದ್ದು, ಹಳಗನ್ನಡ ಸಾಹಿತ್ಯ ಹೆಚ್ಚು ಹೆಚ್ಚಾಗಿ ಆಕರ್ಷಿಸುತ್ತಿದೆ. ಈ ಸರಣಿಯಲ್ಲಿ ದಿನಾಂಕ 8–8–2015 ರಂದು, ಡಾ. ವಿಜಯಾಸುಬ್ಬರಾಜ್ ಅವರು ರಾಘವಾಂಕನ ಹರಿಶ್ಚಂದ್ರ ಕಾವ್ಯದ ಸಪ್ತಮ ಸ್ಥಲದೊಳಗಿನ (ಎನ್. ಬಸವಾರಾಧ್ಯರು ಸಂಪಾದಿಸಿದ ಕೃತಿ) 'ಹಾಡನೊಲಿದಾಲಿಸಿದ 'ಕಿವಿಗೆ ಹೊಲೆಯಿಲ್ಲ; ಕಂಡರಿವವ್ವೆಸಲೇ ನಯನೇಂದ್ರಿಯಂ' ಎಂಬ ಸಾಲುಗಳಿಂದ ಪ್ರಾರಂಭವಾಗುವ ಎರಡು ಷಟ್ಪದಿಗಳನ್ನು ಆಯ್ಕೆ ಮಾಡಿಕೊಂಡು, ಅದರ ಬಗ್ಗೆ ತಮ್ಮ ಗ್ರಹಿಕೆಗಳನ್ನು ಆಯ್ಕೆ ಮಾಡಿಕೊಂಡು ವಿವರಣೆ ನೀಡಿದರು.

**3ನೇ ಪುಟಕ್ಕೆ**



# ಸಂಪಾದಕೀಯ

ಆಗಸ್ಟ್ ತಿಂಗಳ ಕೊನೆಯಲ್ಲಿ ಎಂ.ಎಂ.ಕಲಬುರ್ಗಿ ಅವರ ಮೇಲೆ ಗುಂಡು ಹಾರಿಸಿ ಅವರನ್ನು ಸಾಯಿಸಿದ ದುರ್ಘಟನೆ ಎಲ್ಲರನ್ನೂ ದಿಗ್ಭ್ರಮೆಗೊಳಿಸಿದೆ.ಇದನ್ನು ಮಾಡಿದ ಪಾಪಿಗಳನ್ನು ಆದಷ್ಟೂ ಬೇಗನೆ ಪತ್ತೆಮಾಡಿ ಕಠಿಣ ಶಿಕ್ಷೆ ಕೊಡುವುದು ಅತ್ಯಗತ್ಯ. ಸರಳ ಸಜ್ಜನರಾಗಿದ್ದ ಎಲ್ಲರಿಗೂ ಪರಿಚಿತರಾಗಿದ್ದ ಹಿರಿಯ ಸಂಶೋಧಕ, ಸಾಹಿತಿಮಲ್ಲೇಶಪ್ಪ ಮಡಿವಾಳಪ್ಪ ಕಲಬುರ್ಗಿ ಅವರನ್ನು ಶಾಂತ ಹಾಗೂ ಶಿಕ್ಷಣ ಕೇಂದ್ರವಾದ ಧಾರವಾಡದಂತಹ ಊರಿನಲ್ಲಿ ಈ ರೀತಿಯಾಗಿ ಕೊಲೆ ಮಾಡಿರುವುದು ನಿಜಕ್ಕೂ ಖೇದವುಂಟು ಮಾಡಿದೆ.

ಬಿ.ಎಂ.ಶ್ರೀ.ಅವರ ಮೊಮ್ಮಗಳು ದಿವಂಗತ ಡಾ, ಶಾ. ಬಾಲೂರಾವ್ ಅವರ ಪತ್ನಿ ಹಾಗೂ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದ ಅಭಿಮಾನಿ ಆಗಿರುವ ಶ್ರೀಮತಿ ಕಮಲಿನಿ ಶಾ. ಶಾ. ಬಾಲೂರಾವ್ ಅವರ ಉದಾರತೆಯನ್ನು ಎಷ್ಟು ಕೊಂಡಾಡಿದರೂ ಸಾಲದು.ಅವರು ಈಗಾಗಲೇ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದಲ್ಲಿ ಶ್ರೀ ಸಾಹಿತ್ಯ ಪ್ರಶಸ್ತಿ ಹಾಗೂ ಶಾ. ಬಾಲೂರಾವ್ ಅನುವಾದ ಪ್ರಶಸ್ತಿ ಮತ್ತು ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿಗಳನ್ನು ಸ್ಥಾಪಿಸಿರುತ್ತಾರೆ.ಜೊತೆಗೆಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ನವೀಕರಣಕ್ಕೆ ಧನಸಹಾಯ ಮಾಡಿರುತ್ತಾರೆ.ಈಗ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದಲ್ಲಿ ಲಿಫ್ಟ್ ನ ಕೊರತೆ ಇರುವುದನ್ನು ಗಮನಿಸಿ ತಾವಾಗಿಯೇ ಲಿಫ್ಟ್ ನ್ನು ಅಳವಡಿಸಲು ಬೇಕಾಗುವ ಎಲ್ಲಾ ವೆಚ್ಚವನ್ನೂ ವಹಿಸಿಕೊಂಡಿರುತ್ತಾರೆ.ಅವರಿಗೆ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ಚಿರಋಣಿಯಾಗಿರುತ್ತದೆ.

ಈ ವರ್ಷದ ಶ್ರೀಮತಿ ಸಾವಿತ್ರಮ್ಮ– ಪ್ರೊ.ಎಂವಿಸಿ ಪ್ರಶಸ್ತಿ ಶ್ರೀಮತಿ ಬಾನು ಮುಶ್ತಾಕ್ ಅವರಿಗೆ ಸಂದಿರುತ್ತದೆ.ಅವರಿಗೆ ನಮ್ಮೆಲ್ಲರ ಅಭಿನಂದನೆಗಳು.

ಈ ವರ್ಷದ ಶಾ. ಬಾಲೂರಾವ್ ಅನುವಾದ ಪ್ರಶಸ್ತಿ ಪ್ರೊ. ಹೆಚ್.ಎಸ್. ರಾಘವೇಂದ್ರರಾವ್ ಅವರಿಗೆ ಸಂದಿರುತ್ತದೆ. ಅವರಿಗೆ ನಮ್ಮೆಲ್ಲರ ಅಭಿನಂದನೆಗಳು

**ಬಿಆರ್ ರವೀಂದ್ರನಾಥ್**
ಸಂಪಾದಕರು

## ಸೆಪ್ಟೆಂಬರ್ 2015ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

**04–09–2015 ಸಂಜೆ ಆರು ಗಂಟೆಗೆ**
ಸ್ಥಳ : ಪ್ರೊ. ಶಾ. ಬಾಲೂರಾವ್ ಮಾತಿನ ಮನೆ
ಹಳಗನ್ನಡ ತರಗತಿಗಳ ಸಮಾರೋಪ ಮತ್ತು ಪ್ರಮಾಣಪತ್ರ ವಿತರಣೆ
ಮುಖ್ಯ ಅತಿಥಿಗಳು: ಡಾ. ಕೆ.ಆರ್.ಗಣೇಶ್, ಪ್ರೊ. ಕೆ.ಎಸ್. ಮಧುಸೂದನ

11–09–2015 : **ಅಕ್ಕರಗೊಟ್ಟಿ ಕಾರ್ಯಕ್ರಮ**
ವಿಷಯ :ಸಾಹಿತ್ಯ ಒಂದು ಮರುವ್ಯಾಖ್ಯೆ
ಚಾಲನೆ ನೀಡುವವರು: ಪ್ರೊ. ಅಶ್ವತ್ಥನಾರಾಯಣ ಶಾಸ್ತ್ರಿ, ನೈಷಧಂ
ಸ್ಥಳ : ಪ್ರೊ. ಶಾ. ಬಾಲೂರಾವ್ ಮಾತಿನ ಮನೆ,

**ಸೋಮವಾರ 14–09–2015 ಸಂಜೆ ಆರು ಗಂಟೆಗೆ**
ಕನ್ನಡ ಸಂಸ್ಕೃತಿ ದರ್ಶನ ಸಾಕ್ಷ್ಯ ಚಿತ್ರ ಪ್ರದರ್ಶನ

**19–09–2015 ಶನಿವಾರ ಸಂಜೆ 5.30 ಗಂಟೆ**
ಶ್ರೀಮತಿ ಸಾವಿತ್ರಮ್ಮ – ಪ್ರೊ॥ ಎಂ.ವಿ.ಸೀ. ಸಾಹಿತ್ಯ ಪುರಸ್ಕಾರ–2015
ಪ್ರಶಸ್ತಿ ಪುರಸ್ಕೃತರು: ಶ್ರೀಮತಿ ಬಾನುಮುಷ್ತಾಕ್
ಪ್ರಶಸ್ತಿ ಪ್ರದಾನ: ಡಾ॥ ಕೆ. ಮರುಳಸಿದ್ದಪ್ಪ, ಕರ್ನಾಟಕ ನಾಟಕ ಅಕಾಡೆಮಿಯ ಮಾಜಿ ಅಧ್ಯಕ್ಷರು, ಖ್ಯಾತ ವಿಮರ್ಶಕರು

**ಭಾನುವಾರ 20–09–2015 ಬೆಳಿಗ್ಗೆ 10–30 ಗಂಟೆ**
ಶಾರದಾ ಹನುಮಯ್ಯ ದತ್ತಿ ಕಾರ್ಯಕ್ರಮ
ಗಾಯನ/ವಾಚನ ಸ್ಪರ್ಧೆ: ಕುವೆಂಪು ವಿರಚಿತ ಬೊಮ್ಮನಹಳ್ಳಿಯ ಕಿಂದರಜೋಗಿಪದ್ಯ

**28–09–2015 ಸಂಜೆ ಆರು ಗಂಟೆಗೆ**
ವಚನ ವಿಹಾರ, ಸಂಗೀತಾತ್ಮಕ ಸಾಕ್ಷ್ಯ ಚಿತ್ರ ಪ್ರದರ್ಶನ

## ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಹೊಸ ಕಾರ್ಯಕ್ರಮವಾದ ಈ ಕಾರ್ಯಕ್ರಮದಲ್ಲಿ ಗುರುವಾರ 13ನೇ ಆಗಸ್ಟ್ 2015 ಸಂಜೆ ಆರು ಗಂಟೆಗೆಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಇತ್ತೀಚೆಗೆ ಅಳವಡಿಸಲಾಗಿರುವ ನೂತನ ಪ್ರೊಜೆಕ್ಟರ್ ಮೂಲಕ "ಪೊನ್ನ ಹಾಗೂ ರನ್ನವಿಡಿಯೋ ಚಿತ್ರಗಳನ್ನು ಪ್ರದರ್ಶಿಸಲಾಯಿತು. ಬಹು ಜನರಿಗೆ ಅಪರಿಚಿತವಾದ ಹಲವಾರು ಆಸಕ್ತಿದಾಯಕ ವಿಷಯಗಳನ್ನು ಒಳಗೊಂಡ ಈ ಸಾಕ್ಷ್ಯಚಿತ್ರವು, ಬಹು ಸಂಖ್ಯೆಯಲ್ಲಿ ಬಂದಿದ್ದ ಸಭಿಕರನ್ನು ಕನ್ನಡ ಭಾಷೆಯ ಇತಿಹಾಸದ ಬಗ್ಗೆ ಹಾಗೂ ಕನ್ನಡ ಇತಿಹಾಸದಲ್ಲಿ ಪ್ರಮುಖ ಸ್ಥಾನ ಪಡೆದಿರುವ ಪೊನ್ನ ಹಾಗೂ ರನ್ನ ಅವರುಗಳ ಜೀವನ ಮತ್ತು ಕೃತಿಗಳ ಬಗ್ಗೆ ಹಾಗೂ ಅವುಗಳ ಮಹತ್ವಗಳ ಬಗ್ಗೆ ತಿಳುವಳಿಕೆ ನೀಡಿತು..

### ರಾಸ ಸಾಹಿತ್ಯ ದತ್ತಿ ಕಾರ್ಯಕ್ರಮ

ಸೋಮವಾರ 24ನೇ ಆಗಸ್ಟ್ 2015 ರಂದು ಸಂಜೆ ಆರು ಗಂಟೆಗೆ ತೀನಂಶ್ರೀ, ಕವೆಂ ರಾಘವಾಚಾರ್, ರಾಸ ಸಾಹಿತ್ಯ ದತ್ತಿ ಕಾರ್ಯಕ್ರಮದಡಿಯಲ್ಲಿ ಡಾ. ಸುಬ್ರಮಣ್ಯಸ್ವಾಮಿ, ಕನ್ನಡ ಪ್ರಾಧ್ಯಾಪಕರು, ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ವಿದ್ಯಾಲಯ, ಬೆಂಗಳೂರು ಅವರು ವ್ಯಾಸರಾಯ ಬಲ್ಲಾಳರ ಕಾದಂಬರಿಗಳುವಿಷಯದ ಬಗ್ಗೆ ಉಪನ್ಯಾಸ ನೀಡಿದರು. ಈ ವಿಷಯದ ಬಗ್ಗೆ ಆಳವಾದ ಅಧ್ಯಯನ ಮಾಡಿ ಪಿಎಚ್ ಡಿ



ಪಡೆದಿರುವ ಉಪನ್ಯಾಸಕಾರರು ವಿದ್ವತ್ ಪೂರ್ಣವಾಗಿ ವಿಷಯ ಮಂಡನೆ ಮಾಡಿವ್ಯಾಸರಾಯ ಬಲ್ಲಾಳರ ಎಲ್ಲಾ ಕಾದಂಬರಿಗಳ ಬಗ್ಗೆ ವಿವರಗಳನ್ನು ನೀಡಿ ವಿವಿಧ ಪಾತ್ರಗಳ ವಿಶೇಷತೆಗಳನ್ನು ವಿಶ್ಲೇಷಿಸಿ ವ್ಯಾಸರಾಯ ಬಲ್ಲಾಳ ಅವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಸಲ್ಲಿಸಿರುವ ಸೇವೆಯನ್ನು ವಿವರಿಸಿದರು.ಅಧ್ಯಕ್ಷತೆಯನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಡಾ.ಪಿ ವಿ ನಾರಾಯಣ ವಹಿಸಿದ್ದರು.

### ವಚನ ವಿಹಾರ – ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ

ಗುರುವಾರ 27ನೇ ಆಗಸ್ಟ್ 2015 ಸಂಜೆ ಆರು ಗಂಟೆಗೆ ವಚನ ವಿಹಾರ – ವಚನಗಳ ಗಾಯನ ಮತ್ತು ವ್ಯಾಖ್ಯಾನಗಳನ್ನು ಒಳಗೊಂಡಿರುವ ವಿಡಿಯೋ ಚಿತ್ರಗಳ ಪ್ರದರ್ಶನ ನಡೆಯಿತು.ಸುಮಾರು ಒಂದು ಗಂಟೆಯ ಈ ಸಂಗೀತಮಯ ಕಾರ್ಯಕ್ರಮದಲ್ಲಿ ವಚನ ಚಳುವಳಿ, ಬಸವಣ್ಣ ಅವರ ಪಾತ್ರದ ಬಗ್ಗೆ ಬಹಳ ರಸವತ್ತಾಗಿ ವಿವರಿಸಲಾಗಿದ್ದು ಜೊತೆಗೆ ವಚನಗಳನ್ನು ಪ್ರಸಿದ್ಧ ಗಾಯಕರು ಇಂಪಾಗಿ ಹಾಡಿರುವ ಭಾಗಗಳೂ ಇದ್ದು ಅಧಿಕ ಸಂಖ್ಯೆಯಲ್ಲಿ ಹಾಜರಿದ್ದ ಸಭಿಕರಿಗೆ ಹೊಸ ಅನುಭವವನ್ನು ತಂದುಕೊಟ್ಟಿತು.

---

### ಮೊದಲನೇ ಪುಟದಿಂದ : ಅಕ್ಕರಗೊಟ್ಟಿ ಕಾರ್ಯಕ್ರಮ

ನೇರವಾಗಿ ಪದ್ಯಗಳ ಅರ್ಥ ವಿವರಣೆ ದೊರಕದೆ, ಅದಕ್ಕೆ ಪೂರ್ವಭಾವಿಯಾಗಿ ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿನ ನಾಟಕೀಯತೆ ಮತ್ತು ಆ ಕಾಲದಲ್ಲಿಯೇ, ಇಂದಿಗೂ ಕೂಡಾ ಪ್ರಸ್ತುತವೆನಿಸುವಂತೆ ಜಾತಿ ಮೀಮಾಂಸೆ, ಜಾತಿ ವರ್ಗಗಳ ಕುರಿತಾದ ಮೇಲು ವರ್ಗದವರ ಕ್ಷುಲ್ಲಕ ನಿಲುವುಗಳು. ಮಡಿವಂತಿಕೆಯ ಧೋರಣೆಗಳನ್ನು, ಮಹಾಭಾರತದಲ್ಲಿಯೂ ಕರ್ಣನ ಸಂಬಂಧದಲ್ಲಿ ದ್ರೋಣರಿಂದ ಕುಲನಿಂದೆಯ ಸಂದರ್ಭವನ್ನೂ ವಿವರಿಸಿ, ಈ ಪದ್ಯಗಳಿಗೊಂದು ಪೂರ್ವಪೀಠಿಕೆಯನ್ನು ಅನುಗೊಳಿಸಿ ಪದ್ಯಗಳನ್ನು ವಿವರಿಸಿ. (ಸಾಕಷ್ಟು ವಿಸ್ತೃತವಾಗಿಯೇ) ಸಾಹಿತ್ಯಾಸಕ್ತ ಸಭಿಕರನ್ನು ಚರ್ಚೆಗೆ ಆಹ್ವಾನಿಸಿದರು. ಚರ್ಚೆಯಲ್ಲಿ ಪ್ರೊ॥ ಮಧುಸೂದನ್, ಡಾ॥ ಪಿ.ವಿ. ನಾರಾಯಣ್ ಮತ್ತಿತರರು ಸಕ್ರಿಯವಾಗಿ ಭಾಗವಹಿಸಿದರು. ಪ್ರೊ॥ ಮಧುಸೂದನ್ ಅವರು ಭಿನ್ನ ಪಾಠಗಳ ಹಿನ್ನೆಲೆಯಲ್ಲಿ "ಪಂಚೇಂದ್ರಿಯಗಳೊಳು ನಾಲ್ಕಧಮವೊಂದಧಿಕವೇ" ಎನ್ನುವ ಸಾಲು ಸರಿಯಿಲ್ಲವೆಂದೂ, ಇದಕ್ಕೆ ವಿರುದ್ಧವಾದ ದಿಕ್ಕಿನಲ್ಲಿ ಪಂಚೇಂದ್ರಿಯಗಳೊಳು ನಾಲ್ಕಧಿಕವೊಂದಧಮವೇ' ಎಂದಿರಬೇಕೆಂದು ಒಂದಿಬ್ಬರು ವಿದ್ವಾಂಸರು ಸಂಪಾದಿಸಿದ ಪಾಠಗಳ ಹಿನ್ನೆಲೆಯಲ್ಲಿ, ತಮ್ಮ ವಾದವನ್ನು ಎತ್ತಿ ಹಿಡಿಯುವ ಪ್ರಯತ್ನವನ್ನು ಮಾಡಿದರು. ಆದರೆ ಹಳಗನ್ನಡ ಕಾವ್ಯಗಳ ಬಗ್ಗೆ ಸಾಕಷ್ಟು ಅಧ್ಯಯನ ನಡೆಸಿರುವ ಡಾ. ಪಿ.ಬಿ. ನಾರಾಯಣ್ ಅವರು ಪ್ರಸ್ತುತ ಪಾಠವನ್ನು (ಬಸವಾರಾಧ್ಯರ ಸಂಪಾದಿತ ಕೃತಿಯಲ್ಲಿನ) ಸರಿಯೆಂದೂ ತರ್ಕಬದ್ಧವೆಂದೂ ತೋರಿಸಿಕೊಟ್ಟರು. ಉಳಿದವರೂ ಕೂಡಾ ಇದನ್ನೇ ಸಮರ್ಥಿಸಿದರು. ಇದಲ್ಲದೆ ಬೇರೆ ಬೇರೆ ನೆಲೆಗಳಿಂದಲೂ ಪದ್ಯಗಳ ವಿಶ್ಲೇಷಣೆ ವಿವರಣೆ, ಚರ್ಚೆಗಳು ಮುಂದುವರೆದು ಈ ಅಕ್ಕರಗೊಟ್ಟಿ ಅತ್ಯಂತ ಯಶಸ್ವಿಯಾಗಿ ಮುಕ್ತಾಯವಾಯಿತು.

ಹೀಗಾಗಿ ಈ ಚರ್ಚೆಯು ತುಂಬ ಉಪಯುಕ್ತವಾಗಿ ಚಿಂತನೆಗಳ ಕಡೆತದಿಂದ ಹೊಸ ಆಲೋಚನೆಗಳಿಗೆ ಎಡೆಗೊಟ್ಟಿತು. ಚರ್ಚೆಯಲ್ಲಿ ಡಾ. ನಳಿನಿ ವೆಂಕಟೇಶ್, ಡಾ.ಜಯಮ್ಮ ಕರಿಯಣ್ಣ, ಡಾ.ಪಿ.ವಿ. ನಾರಾಯಣ ಮುಂತಾದವರು ಪಾಲ್ಗೊಂಡು ಕಾರ್ಯಕ್ರಮ ಯಶಸ್ವಿಯಾಗಲು ಸಹಕರಿಸಿದರು.

**('ಅಕ್ಕರ ಗೊಟ್ಟಿ'ಯ ಸೆಪ್ಟೆಂಬರ್ ತಿಂಗಳ ಕಾರ್ಯಕ್ರಮ 11-09-2015 ರಂದು ಸಂಜೆ 6-00 ಗಂಟೆಗೆ 'ಶಾ, ಬಾಲೂರಾವ್ ಮಾತಿನ ಮನೆ'ಯಲ್ಲಿ)**



## ಅಭಿನಂದನೆಗಳು

ನಿವೃತ್ತ ಕನ್ನಡ ಪ್ರಾಧ್ಯಾಪಕರೂ ಸುಪ್ರಸಿದ್ಧ ಲೇಖಕರೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಹೊರತರುತ್ತಿರುವ ಷಾಣ್ಮಾಸಿಕ ವಿದ್ವತ್ ಪತ್ರಿಕೆ "ಕರ್ನಾಟಕ ಲೋಚನ"ದ ಸಂಪಾದಕರೂ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಕಾರ್ಯದರ್ಶಿಗಳೂ ಆದ ಪ್ರೊ.ಜಿ. ಅಬ್ದುಲ್ ಬಷೀರ್ ಅವರ "ವಚನ ವಾಙ್ಮಯ ವಿಹಾರ" ಎಂಬ ಕೃತಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ ಶ್ರೀಮತಿ ಗೌರಮ್ಮ ಗಂಗಾಧರಯ್ಯ ಮತ್ತು ಮಕ್ಕಳ "ಸಾಹಿತ್ಯ ದತ್ತಿ ಪ್ರಶಸ್ತಿ" ಲಭಿಸಿದೆ. ಹೊಂಗನಸು ಶ್ರೀಯುತರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತದೆ.

## ಪತ್ರಿಕಾ ಪ್ರಕಟಣೆ

ರಾಷ್ಟ್ರ ಕವಿ ಕುವೆಂಪು ಅವರು ರಚಿಸಿದ

**ಬೊಮ್ಮನಹಳ್ಳಿಯ ಕಿಂದರಜೋಗಿ**

**ಪದ್ಯದಗಾಯನ ಸ್ಪರ್ಧೆ**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಭಾನುವಾರ20ನೇ ಸೆಪ್ಟೆಂಬರ್ 2015 ರಂದುರಾಷ್ಟ್ರ ಕವಿ ಕುವೆಂಪು ಅವರು ರಚಿಸಿದ **ಬೊಮ್ಮನಹಳ್ಳಿಯ ಕಿಂದರಜೋಗಿ** ಪದ್ಯದಗಾಯನ ಸ್ಪರ್ಧೆಯನ್ನು ಆಯೋಜಿಸಿರುತ್ತದೆ.

ಸ್ಥಳ: ಬಿ.ಎಂ.ಶ್ರೀ ಕಲಾಭವನ, 3ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು–560019

ಸಮಯ: ಬೆಳಿಗ್ಗೆ 10 ರಿಂದ 1 ರವರೆಗೆ

ಈ ಸ್ಪರ್ಧೆಯಲ್ಲಿ ಎಲ್ಲಾ ವಯೋಮಾನದವರೂ ಭಾಗವಹಿಸಲು ಮುಕ್ತ ಅವಕಾಶವಿದೆ. ವಿಜೇತರಿಗೆ ಸ್ಮರಣಿಕೆಯನ್ನು ವಿತರಿಸಲಾಗುವುದು.

ಹೆಚ್ಚಿನ ವಿವರಗಳಿಗೆ ಹಾಗೂ ನೋಂದಾಯಿಸಿಕೊಳ್ಳಲು ಸಂಪರ್ಕಿಸಿ: ಗೌರವ ಕಾರ್ಯದರ್ಶಿ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ (ರಿ), 3ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು–560019

ದೂರವಾಣಿ ಸಂಖ್ಯೆ : 08026615877

**ನೋಂದಾಯಿಸಿಕೊಳ್ಳಲು ಕೊನೆಯ ದಿನಾಂಕ : 15ನೇ ಸೆಪ್ಟೆಂಬರ್ 2015**

## ಶಾ. ಬಾಲೂರಾವ್ ಅನುವಾದ ಪ್ರಶಸ್ತಿ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಪ್ರತಿ ವರ್ಷ ನೀಡುವ ರೂಪಾಯಿ ಇಪ್ಪತ್ತೈದು ಸಾವಿರಗಳ ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುವ ಶಾ. ಬಾಲೂರಾವ್ ಅನುವಾದ ಪ್ರಶಸ್ತಿಗಾಗಿ 2014ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ ಸಾಹಿತ್ಯದ ಯಾವುದೇ ಪ್ರಕಾರದ ಬೇರಾವುದೇಭಾಷೆಯಿಂದ ಕನ್ನಡಕ್ಕೆ ಅಥವಾ ಕನ್ನಡದಿಂದ ಇಂಗ್ಲೀಷ್ ಗೆ ಅನುವಾದವಾಗಿರುವ ಕೃತಿಗಳನ್ನು ಆಹ್ವಾನಿಸಿದ್ದು 22 ಅನುವಾದಕರು ತಮ್ಮ ಕೃತಿಗಳನ್ನು ಸಲ್ಲಿಸಿದ್ದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ನೇಮಕ ಮಾಡಿದ್ದ ಇಬ್ಬರು ವಿದ್ವಾಂಸರು(ಪ್ರೊ. ಕೆ.ಎಸ್. ಮಧುಸೂದನ್ ಹಾಗೂ ಪ್ರೊ. ಅಶ್ವತ್ಥನಾರಾಯಣ ಶಾಸ್ತ್ರಿ, ನೈಷಧಂ) ಆಯ್ಕೆ ಮಾಡಿದ ಪ್ರೊ. ಎಚ್.ಎಸ್. ರಾಘವೇಂದ್ರರಾವ್‌ಅವರು ಇಂಗ್ಲೀಷ್ ನಿಂದ ಕನ್ನಡಕ್ಕೆ ಅನುವಾದಿಸಿದ ಹತ್ತು ದಿಕ್ಕಿನ ಬೆಳಕು ಕೃತಿಗೆ ಶಾ. ಬಾಲೂರಾವ್ ಅನುವಾದ ಪ್ರಶಸ್ತಿ ಲಭಿಸಿದೆ.ಹೊಂಗನಸು ಶ್ರೀಯುತರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತದೆ.

## ಸದಸ್ಯರ ಗಮನಕ್ಕೆ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ನಡೆಸುವ ಕಾರ್ಯಕ್ರಮಗಳ ವಿವರಗಳನ್ನು ಪ್ರತಿತಿಂಗಳೂ ಈ ಪತ್ರಿಕೆಯಲ್ಲಿ ಪ್ರಕಟಿಸಲಾಗುತ್ತದೆ ಹಾಗೂ ತಿಂಗಳ ಮೊದಲ ವಾರದಲ್ಲಿ ಎಲ್ಲಾ ಸದಸ್ಯರಿಗೂ ತಲುಪಿಸಲಾಗುತ್ತದೆ.ದಯವಿಟ್ಟು ಎಲ್ಲಾ ಸದಸ್ಯರೂ ಇದನ್ನೇ ಆಹ್ವಾನ ಪತ್ರಿಕೆಂಯೆಂದು ಪರಿಗಣಿಸಬೇಕು ಎಂದು ಕೋರಿಕೊಳ್ಳುತ್ತೇವೆ. ಇನ್ನು ಮುಂದೆ ಸದಸ್ಯರಿಗೆ ಪ್ರತ್ಯೇಕ ಆಹ್ವಾನ ಪತ್ರಿಕೆಗಳನ್ನು ಕಳುಹಿಸಲಾಗುವುದಿಲ್ಲ.

## ಪ್ರಶಸ್ತಿಗಾಗಿ ಕೃತಿಗಳ ಆಹ್ವಾನ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಪ್ರತಿ ವರ್ಷ ನೀಡುವ **ರೂಪಾಯಿ ಇಪ್ಪತ್ತೈದು ಸಾವಿರಗಳ ನಗದು ಹಾಗೂ ಸ್ಮರಣಿಕೆಯನ್ನು** ಒಳಗೊಂಡಿರುವ **ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ**ಗಾಗಿ 35 ವರ್ಷ ವಯಸ್ಸು ಮೀರದ ಯುವ ಬರಹಗಾರರು ರಚಿಸಿದ 2014ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ ಸಾಹಿತ್ಯದ ಯಾವುದೇ ಪ್ರಕಾರದ ಕೃತಿಗಳನ್ನು ಆಹ್ವಾನಸುತ್ತಿದೆ.

ಆಸಕ್ತ ಲೇಖಕರು ಪ್ರಕಟಗೊಂಡ ಕೃತಿಯ ಒಂದು ಪ್ರತಿಯನ್ನು ತಮ್ಮ ವಿವರಗಳ ಜೊತೆ ಗೌರವ ಕಾರ್ಯದರ್ಶಿ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ (ರಿ), 3ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು–560019 ದೂರವಾಣಿ ಸಂಖ್ಯೆ : 08026615877 ಇವರಿಗೆ ಕಳುಹಿಸಬಹುದು. **ವಿಸ್ತರಿಸಲಾದ ಕೊನೆಯ ದಿನಾಂಕ : 30 ಸೆಪ್ಟೆಂಬರ್ 2015**

# ಶ್ರದ್ಧಾಂಜಲಿ

## ಎಂ.ಎಂ.ಕಲಬುರ್ಗಿ (1938–2015)



ಧಾರವಾಡ, ಆ.30 : ಗುಂಡಿನ ದಾಳಿಯಲ್ಲಿ ಹಿರಿಯ ಸಂಶೋಧಕ, ಸಾಹಿತಿ ಎಂ.ಎಂ.ಕಲಬುರ್ಗಿ ಸಾವನ್ನಪ್ಪಿದ್ದಾರೆ. ಧಾರವಾಡದಲ್ಲಿನ ಅವರ ಮನೆಗೆ ನುಗ್ಗಿದ ಅಪರಿಚಿತರು ಎರಡು ಸುತ್ತು ಗುಂಡು ಹಾರಿಸಿದ್ದಾರೆ. ಹಣೆ ಮತ್ತು ಎದೆಗೆ ಗುಂಡು ತಗುಲಿದ ಕಲಬುರ್ಗಿ ಅವರು ಚಿಕಿತ್ಸೆ ಫಲಕಾರಿಯಾಗದೇ ಮೃತಪಟ್ಟಿದ್ದಾರೆ. ಎಂ.ಎಂ.ಕಲಬುರ್ಗಿ ಅವರ ಪೂರ್ಣ ಹೆಸರು ಮಲ್ಲೇಶಪ್ಪ ಮಡಿವಾಳಪ್ಪ ಕಲಬುರ್ಗಿ.1938ರ ನವೆಂಬರ್ 28ರಂದು ವಿಜಯಪುರ ಜಿಲ್ಲೆಯ ಸಿಂಧಗಿ ತಾಲೂಕಿನ ಗುಬ್ಬೇವಾಡದಲ್ಲಿ ಕಲಬುರ್ಗಿ ಅವರು ಜನಿಸಿದರು.1962ರಲ್ಲಿ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಭೋಧಕರಾಗಿ ಸೇವೆ ಆರಂಭಿಸಿದ ಅವರು.1966ರಲ್ಲಿ ಕರ್ನಾಟಕ ವಿವಿ ಅಧ್ಯಾಪಕರಾದರು. ಹಂಪಿ ವಿಶ್ವವಿದ್ಯಾಲಯದ ಕುಲಪತಿಯಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದರು. 'ಬಸವಣ್ಣನವರ ಕುರಿತ ಶಾಸನಗಳು' ಎಂ.ಎಂ.ಕಲಬುರಗಿ ಅವರ ಮೊದಲ ಕೃತಿ.41 ಪ್ರಾಚೀನ ಗ್ರಂಥಗಳನ್ನು ಸಂಪಾದಿಸಿರುವ ಅವರು, 100 ಕೃತಿಗಳನ್ನು ರಚನೆ ಮಾಡಿದ್ದಾರೆ.ಸೃಜನಶೀಲ ಸಾಹಿತ್ಯದಲ್ಲೂ ಆಸಕ್ತಿಯಿರುವ ಕಲಬುರ್ಗಿಯವರು ಎರಡು ನಾಟಕಗಳು ಮತ್ತು ಒಂದು ಕವನ ಸಂಕಲವನ್ನು ಪ್ರಕಟಿಸಿದ್ದಾರೆ. ಕನ್ನಡ ಸಂಸ್ಕೃತಿ, ಇತಿಹಾಸ, ಸಾಹಿತ್ಯ, ಶಾಸನ, ಜಾನಪದ, ವ್ಯಾಕರಣ, ಹಸ್ತಪ್ರತಿ, ಗ್ರಂಥ ಸಂಪಾದನಾ ಶಾಸ್ತ್ರ ಸೇರಿದಂತೆ ಹಲವು ವಿಷಯಗಳಲ್ಲಿ ಅವರು ಹಲವಾರು ಸಂಶೋಧನೆಗಳನ್ನು ಮಾಡಿದ್ದರು. ಗದಗದಲ್ಲಿ ಶ್ರೀ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆಯ ಸಂಸ್ಥಾಪಕರು. ಪ್ರಶಸ್ತಿಗಳು : ಕಲಬುರ್ಗಿ ಅವರ ಸಾಹಿತ್ಯ ಸೇವೆಗೆ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಚಿದಾನಂದ ಪ್ರಶಸ್ತಿ, ನೃಪತುಂಗ ಪ್ರಶಸ್ತಿ, ನಾಡೋಜ ಪ್ರಶಸ್ತಿ ಸೇರಿದಂತೆ ಹಲವು ಪಶಸ್ತಿಗಳು ಬಂದಿದ್ದವು. ವಿವಾದದ ಹೇಳಿಕೆ : 'ದೇವತೆಗಳು ಮೂರ್ತ ಸ್ವರೂಪವಾದ್ದರಿಂದ ದೇವತೆಗಳ ವಿಗ್ರಹ, ಮೂರ್ತಿಗಳ ಮೇಲೆ ಮೂತ್ರ ಮಾಡಿದರೂ ತಪ್ಪೇನು ಇಲ್ಲ, ವಿಗ್ರಹಗಳಿಗೆ ಕಾಡುವ ಕಾಪಾಡುವ ಶಕ್ತಿ ಇಲ್ಲ, ಇದರಿಂದ ಪೂಜೆ ನಿಲ್ಲಿಸಿದ್ರೆ ಅಪಾಯವಿಲ್ಲ' ಎಂದು ಎಂ.ಎಂ. ಕಲಬುರ್ಗಿ ಅವರು ನೀಡಿದ್ದ ಹೇಳಿಕೆ ಬಗ್ಗೆ ಭಾರೀ ವಿರೋಧ ವ್ಯಕ್ತವಾಗಿತ್ತು.ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ ಪ್ರೊ.ಎಂ.ಎಂ.ಕಲಬುರ್ಗಿ ಅವರ ಮೇಲೆ ಮಾಡಲಾದ ಹಲ್ಲೆಯನ್ನು ಖಂಡಿಸುತ್ತದೆ. ಇಂತಹ ಹೀನ ಕೃತ್ಯವನ್ನು ಎಸಗಿದ ಅಪರಾಧಿಗಳನ್ನು ಶೀಘ್ರವಾಗಿ ಪತ್ತೆ ಮಾಡಿ ಸೂಕ್ತ ಶಿಕ್ಷೆಯಾಗಬೇಕಿದೆ.

## ಪಂಡರಿನಾಥಾಚಾರ್ಯ ಗಲಗಲಿ (1922–2015)



ಆಗಸ್ಟ್ ತಿಂಗಳ ಕೊನೆಯಲ್ಲಿ ಹಿರಿಯ ವಿದ್ವಾಂಸರೂ ಸಂಸ್ಕೃತ ಕನ್ನಡ ಭಾಷಾಂತರಕಾರರೂ ಆಗಿದ್ದ ಶ್ರೀ ಪಂಡರಿನಾಥಾಚಾರ್ಯ ಗಲಗಲಿ ಅವರು ನಿಧನ ಹೊಂದಿರುತ್ತಾರೆ.

ಪಂಡರಿನಾಥಾಚಾರ್ಯ ಗಲಗಲಿಯವರು ವಿಜಾಪುರ ಜಿಲ್ಲೆಯ ಗಲಗಲಿ ಗ್ರಾಮದಲ್ಲಿ 10 ಜುಲೈ 1922 ರಂದು ಜನಿಸಿದರು. ಬಾಗಲಕೋಟೆಯಲ್ಲಿ ಸಂಸ್ಕೃತ ಬೋಧಕರಾಗಿ ಕೆಲಸ ಮಾಡಿದರು. 1961 ರಲ್ಲಿ ಗದುಗಿಗೆ ಆಗಮಿಸಿ ಅಲ್ಲಿ ' ವೀರನಾರಾಯಣ ಸಂಸ್ಕೃತ ಪಾಠಶಾಲೆ' ಪ್ರಾರಂಭಿಸಿದರು ಹಾಗು 'ಮಧುರ ವಾಣಿ' ಮತ್ತು ' ಪಂಚಾಮೃತ' ವೆಂಬ ಮಾಸಪತ್ರಿಕೆಗಳನ್ನೂ ಸಹ ಪ್ರಾರಂಭಿಸಿದರು.1971ರಲ್ಲಿ ಗಲಗಲಿಯವರು ಹುಬ್ಬಳ್ಳಿಗೆ ಆಗಮಿಸಿ ' ವೇದ, ಪುರಾಣ ಸಾಹಿತ್ಯಮಾಲಾ' ಟ್ರಸ್ಟಸ್ಥಾಪಿಸಿದರು.ಈ ಟ್ರಸ್ಟ ಮೂಲಕ ಗಲಗಲಿಯವರು ಅನೇಕ ಸಂಸ್ಕೃತ ಪುರಾಣಗಳನ್ನು ಕನ್ನಡಕ್ಕೆ ಭಾಷಾಂತರಿಸಿದರು.ಅಲ್ಲದೆ ಕನ್ನಡ ಹಾಗು ಸಂಸ್ಕೃತದಲ್ಲಿಯೂ ಸಹ ಅನೇಕ ಗ್ರಂಥಗಳನ್ನು ರಚಿಸಿರುವರು.

ಪಂಡರಿನಾಥಾಚಾರ್ಯ ಗಲಗಲಿಯವರಿಗೆ ದೊರೆತ ಪುರಸ್ಕಾರಗಳು ಅನೇಕ. ಹಿಂದಿನ ರಾಷ್ಟ್ರಪತಿಗಳಾದ ಬಾಬು ರಾಜೇಂದ್ರ ಪ್ರಸಾದ, ಶಂಕರ ದಯಾಳ ಶರ್ಮಾ ಹಾಗು ಹಿಂದಿನ ಪ್ರಧಾನ ಮಂತ್ರಿ ಇಂದಿರಾ ಗಾಂಧಿಯುವರಿಂದ ಇವರಿಗೆ ಸನ್ಮಾನ ಲಭಿಸಿದೆ.ಪೇಜಾವರ ಪ್ರಥಮ ಪ್ರಶಸ್ತಿ ಹಾಗು ಉತ್ತರಾದಿ ಮಠದಧ್ಯಾನ ಪ್ರಮೋದ ಪ್ರಶಸ್ತಿ ಇವರಿಗೆ ದೊರೆತಿದೆ. ಕಂಚಿ ಕಾಮಕೋಟಿ ಮಠದಿಂದ ಸ್ವರ್ಣಪದಕ ಹಾಗು ತಿರುಪತಿ ವಿಶ್ವವಿದ್ಯಾಲಯದಿಂದ ' ಮಹಾ ಮಹೋಪಾಧ್ಯಾಯ' ಪದವಿ ಇವರಿಗೆ ಲಭಿಸಿವೆ. ಪೇಜಾವರ ಸ್ವಾಮಿಗಳಿಂದ' ಕವಿಕುಲತಿಲಕ', ಭಂಡಾರಕೆರೆ ಸ್ವಾಮಿಗಳಿಂದ ' ಶಾಸ್ತ್ರ ಪ್ರವಚನ ರತ್ನ' ಹಾಗು ' ಪುರಾಣತೀರ್ಥ' , ಮುಳುಬಾಗಿಲು ಮಠದಿಂದ ' ವಿದ್ಯಾಧಿರಾಜ ಪ್ರಶಸ್ತಿ' ,ಬೆಂಗಳೂರು ನಾಗರಿಕರಿಂದ ' ವಿದ್ವತ್ ಕುಲತಿಲಕ' ,ವಿಬುಧೇಶ ತೀರ್ಥರಿಂದ ' ಸಾಹಿತ್ಯ ರತ್ನ' , ಧಾರವಾಡದ ಧರ್ಮ,ಸಂಸ್ಕೃತಿ ಪ್ರತಿಷ್ಠಾನದಿಂದ ' ಸಂಸ್ಕೃತಿವಾಹಕ' ಮೊದಲಾದ ಪ್ರಶಸ್ತಿಗಳು ಗಲಗಲಿಯವರಿಗೆ ಲಭಿಸಿವೆ.

ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಿಸಿದ ಗ್ರಂಥಗಳು: ಹರಿವಂಶ ಪುರಾಣ, ವಿಷ್ಣುಪುರಾಣ, ವರಾಹಪುರಾಣ, ವಾಮನಪುರಾಣ, ದಕ್ಷಪುರಾಣ, ನಾರದಪುರಾಣ, ಬ್ರಹ್ಮಪುರಾಣ, ಬ್ರಹ್ಮ ವೈವರ್ತಪುರಾಣ, ಭವಿಷ್ಯಪುರಾಣ, ಪದ್ಮಪುರಾಣ, ಸ್ಕಂದಪುರಾಣ

ಸಂಸ್ಕೃತ ಭಾಷೆಯಲ್ಲಿ ರಚಿಸಿದ ಗ್ರಂಥಗಳು: ರಾಮರ ಸಾಯನಮ್, ಕೃಷ್ಣಕಂಠಾಭರಣಮ್, ಪವನಪಾವನ ಶಂಭುಲಿಂಗೇಶ್ವರ, ವಿಜಯಚಂಪೂ, ಪಂಢರಪುರ ವಿಠ್ಠಲ ಶತಕ.

## ಸಂಶೋಧಕ ಪ್ರೊ. ಎಸ್. ವಿದ್ಯಾಶಂಕರ್

ಬೆಂಗಳೂರು: ವಚನಸಾಹಿತ್ಯಕ್ಕೆ ಸಂಶೋಧನೆಯ ಮೆರುಗು ಹಾಗೂ ನಂಬಿದ ಸಿದ್ಧಾಂತಕ್ಕಾಗಿ ಬಂಡಾಯ ಏಳುತ್ತಿದ್ದ ಕನ್ನಡದ ಹಿರಿಯ ಸಂಶೋಧಕ ಹಾಗೂ ಲೇಖಕ ಪ್ರೊ.ಎಸ್. ವಿದ್ಯಾಶಂಕರ್ (68) ನಿಧನರಾದರು.

ಪ್ರೊ.ಎಸ್. ವಿದ್ಯಾಶಂಕರ ಅವರು ಬೆಂಗಳೂರು ವಿಶ್ವ ವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರ ನಿರ್ದೇಶಕರಾಗಿದ್ದರು.ಜೊತೆಗೆ, ಶೈಕ್ಷಣಿಕ ಮಂಡಳಿಯ ಸದಸ್ಯರಾಗಿಯೂ ಕೆಲಸ ನಿರ್ವಹಿಸಿದ್ದರು. ಮೂಲತಃ ಚಾಮರಾಜನಗರ ಜಿಲ್ಲೆ ಕೊಳ್ಳೇಗಾಲ ತಾಲೂಕಿನ ಮಧುವನಹಳ್ಳಿ ಗ್ರಾಮದವರಾಗಿದ್ದ ಪ್ರೊ.ವಿದ್ಯಾಶಂಕರ್, ಧಾರವಾಡದ ಕರ್ನಾಟಕ ವಿವಿಯಲ್ಲಿ ಎಂ.ಎ.ಪದವಿ ಪಡೆದರು.

'ವೀರಶೈವ ಪುರಾಣ ' ಇವರ ಪಿಎಚ್.ಡಿ.ಪ್ರಬಂಧವಾಗಿತ್ತು. 'ನಂಬಿಯಣ್ಣ: ಒಂದು ಅಧ್ಯಯನ', 'ವಚನಾನುಶೀಲ', 'ನೆಲದ ಮರೆಯ ನಿದಾನ', 'ವೀರಶೈವ ಸಾಹಿತ್ಯ– ಚರಿತ್ರೆ' ನಾಲ್ಕು ಸಂಪುಟ, 'ಭೀಮಕವಿಯ ಬಸವಪುರಾಣ' ಸೇರಿದಂತೆ ಹಲವಾರು ಗ್ರಂಥ ಗಳನ್ನು ರಚಿಸಿದ್ದರು.ಅಂಬಿಗರ ಚೌಡಯ್ಯ ಹಾಗೂ ಸಿದ್ಧರಾಮಯ್ಯನವರ ವಚನಗಳನ್ನೂ ಸಂಪಾದಿಸಿದ್ದರು. ಸುಮಾರು 100 ಕೃತಿಗಳನ್ನು ಅವರು ರಚಿಸಿದ್ದು, ಈ ಪೈಕಿ ವೀರಶೈವ ತತ್ವಕ್ಕೆ ಸಂಬಂಧಿಸಿದ ಕೃತಿಗಳೇ ಹೆಚ್ಚು.'ಭುವನದ ಭಾಗ್ಯ' ಅವರ ಪ್ರಮುಖ ಕೃತಿ.ಪ್ರಿಯದರ್ಶಿನಿ ಪ್ರಕಾಶನದ ಅಡಿಯಲ್ಲಿ ಹಲವಾರು ಪ್ರಮುಖ ಸಂಶೋಧನಾ ಕೃತಿ ಗಳನ್ನು ಪ್ರಕಟಿಸಿದ ಅವರು, ವೀರಶೈವ ಸಿದ್ಧಾಂತಕ್ಕೆ ಸಂಬಂಧಿ ಸಿದಂತೆ ಸಕ್ರಿಯರಾಗಿ ಕೆಲಸ ಮಾಡುತ್ತಿದ್ದರು. ಸ್ವಪ್ನಲೋಕ ಹೆಸರಿನ ಸಾಹಿತ್ಯ ಪತ್ರಿಕೆಯನ್ನೂ ನಡೆಸುತ್ತಿದ್ದರು. ಕಾವ್ಯಾನಂದ ಪುರಸ್ಕಾರ, ಕನ್ನಡ ಸಾಹಿತ್ಯ ಅಕಾಡೆಮಿ ಸೇರಿದಂತೆ ಹಲವಾರು ಪ್ರಶಸ್ತಿಗಳನ್ನು ಪಡೆದಿದ್ದ ಪ್ರೊ.ಎಸ್. ವಿದ್ಯಾಶಂಕರ್ ತಮ್ಮ ನಂಬಿಕೆಗೆ ತಕ್ಕಂತೆ ಬದುಕಿದವರು.



ದಾಸಿಮಯ್ಯ ವಿವಾದ ದೇವರ ದಾಸಿಮಯ್ಯ ಹಾಗೂ ಜೇಡರ ದಾಸಿಮಯ್ಯ ಬೇರೆಬೇರೆ.ದೇವರ ದಾಸಿಮಯ್ಯ ಶಿವಭಕ್ತ,ಆದರೆ, ಜೇಡರ ದಾಸಿಮಯ್ಯ ವಚನಗಳನ್ನು ರಚಿಸಿದ ಶರಣ ಎಂದು ಪ್ರತಿಪಾದಿಸುತ್ತಿದ್ದ ಪ್ರೊ.ಎಸ್. ವಿದ್ಯಾಶಂಕರ್, ಈ ಕುರಿತಂತೆ ಸರ್ಕಾರದ ನಿಲುವಿನ ವಿರುದ್ಧ ಬಹಿರಂಗವಾಗಿ ಅಸಮಾಧಾನ ವ್ಯಕ್ತಪಡಿಸಿದ್ದರು.

**ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನವು ಮೃತರ ಆತ್ಮಕ್ಕೆ ಶಾಂತಿ ಸಿಗಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತದೆ.**

## ಶಾಶ್ವತ ನಿಧಿ

### ಸಾಹಿತ್ಯಾಸಕ್ತರಲ್ಲಿ ಒಂದು ಬಿನ್ನಹ

ಪ್ರತಿಷ್ಠಾನದ ಮುಂದೆ ಹಸ್ತಪ್ರತಿಗಳ ರಕ್ಷಣೆ, ಡಿಜಿಟೀಕರಣ ಮತ್ತು ಅಧ್ಯಯನ, ಮಾಧ್ಯಮ ಕನ್ನಡ ಬರವಣಿಗೆಯ ಬಗೆಗಿನ ಸ್ನಾತಕೋತ್ತರ ಡಿಪ್ಲೊಮ ತರಗತಿಗಳನ್ನು ನಡೆಸುವುದು, ನಮ್ಮ ಹಿರಿಯ ಸಂಶೋಧಕರ ಬಗ್ಗೆ ಸಾಕ್ಷ್ಯಚಿತ್ರಗಳನ್ನು ತಯಾರಿಸುವ ಯೋಜನೆ, ಮೌಲಿಕ ಪುಸ್ತಕಗಳ ಪ್ರಕಟಣೆ , ಹಳಗನ್ನಡದ ವಿಶೇಷ ಅಧ್ಯಯನಕ್ಕಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸುವುದುಇಂತಹ ಹಲವಾರು ಯೋಜನೆಗಳು ಮುಂದಿವೆ. ಇವಕ್ಕೆಲ್ಲ ಹಣದ ಆವಶ್ಯಕತೆ ಇದೆ.

ಈ ದಿಸೆಯಲ್ಲಿ ಪ್ರತಿಷ್ಠಾನವು ಒಂದು ಶಾಶ್ವತ ನಿಧಿಯನ್ನು ಸ್ಥಾಪಿಸುವ ಆಲೋಚನೆಯಲ್ಲಿದೆ.ಈ ನಿಧಿಯ ಮೇಲಿನ ಬಡ್ಡಿ ಹಣದಿಂದ ನಮ್ಮ ಮುಂದಿನ ಯೋಜನೆಗಳನ್ನು ಕಾರ್ಯಗತಗೊಳಿಸುವುದು ನಮ್ಮ ಉದ್ದೇಶವಾಗಿರುತ್ತದೆ.ನಮ್ಮ ಉದ್ದೇಶ ಸಾಕಾರಗೊಳ್ಳಲು ತಮ್ಮಂತಹ ಉದಾರಿಗಳ ನೆರವು ಅಗತ್ಯ.

ತಮ್ಮಲ್ಲಿ ವಿಶೇಷವಾಗಿ ಮಾಡುವ ಮನವಿಯೆಂದರೆ, ತಾವು ಉದಾರವಾಗಿ ದಾನದ ರೂಪದಲ್ಲಿ ನಮ್ಮ ಸಂಸ್ಥೆಗೆ ಧನಸಹಾಯ ಮಾಡಬೇಕೆಂದು ತಮ್ಮನ್ನು ಕೋರುತ್ತೇವೆ. ತಮ್ಮಂತಹವರು ನಮ್ಮ ಚಟುವಟಿಕೆಗಳಿಗೆ ಬೆಂಬಲ ನೀಡಿದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರ ಮತ್ತಷ್ಟು ಶ್ರೀಮಂತವಾಗಲು ಸಾಧ್ಯವಾಗಬಹುದಾಗಿರುತ್ತದೆ.

ತಾವು ದತ್ತಿನಿಧಿಗಳನ್ನು ಸ್ಥಾಪಿಸುವ ಮೂಲಕ, ಶಾಶ್ವತ ನಿಧಿಗೆ ಉದಾರವಾಗಿ ಧನಸಹಾಯ ಮಾಡುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳನ್ನು ಖರೀದಿಸುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳ ಪ್ರಾಯೋಜಕತ್ವವನ್ನು ವಹಿಸಿಕೊಳ್ಳುವುದರ ಮೂಲಕ ಹಲವು ವಿಧಗಳಲ್ಲಿ ನಮ್ಮ ಜೊತೆ ಕೈ ಜೋಡಿಸಬಹುದಾಗಿರುತ್ತದೆ.

ಪ್ರತಿಷ್ಠಾನಕ್ಕೆ ನೀಡುವ ನಿಧಿಯ ಮೊಬಲಗಿನ ಮೇಲೆ ಭಾರತ ಸರ್ಕಾರದ ಆದಾಯ ತೆರಿಗೆ ಕಾನೂನಿನ '80 ಜಿ' ಅನ್ವಯ ತೆರಿಗೆ ವಿನಾಯಿತಿ ದೊರೆಯುತ್ತದೆ.

ತಾವು ತಮ್ಮ ಕಾಣಿಕೆಗಳನ್ನು ಚೆಕ್/ಡಿಡಿ ಮೂಲಕ ಪ್ರತಿಷ್ಠಾನದ ಹೆಸರಿನಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು.

ಶಾಶ್ವತ ನಿಧಿಗೆ ಜೂನ್ 2015 ರಲ್ಲಿ ಕಾಣಿಕೆ ನೀಡಿರುವವರ ಪಟ್ಟಿ:

ಡಾ. ಪಿ.ವಿ.ನಾರಾಯಣ, ಶ್ರೀ ಎಂ ಎಸ್ ರಾಮಪ್ರಸಾದ್ ಶ್ರೀ ಡೀ.ನಂ.ವೆಂಕಟರಮಣಯ್ಯ ಹಾಗೂ ಶ್ರೀ ಗುರುಪ್ರಸಾದ್

ಇಲ್ಲಿಯವರೆಗೆ ಸಂಗ್ರಹಿಸಲಾದ ಮೊತ್ತ ರೂ. 14.40 ಲಕ್ಷ

## ಶ್ರೀಮತಿ ಸಾವಿತ್ರಮ್ಮ – ಪ್ರೊ॥ ಎಂ.ವಿ.ಸೀ. ಸಾಹಿತ್ಯ ಪುರಸ್ಕಾರ–2015

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ನೀಡುತ್ತಿರುವ ಶ್ರೀಮತಿ ಸಾವಿತ್ರಮ್ಮ– ಪ್ರೊ. ಎಂ.ವಿ.ಸೀ ಸಾಹಿತ್ಯ ಪುರಸ್ಕಾರಕ್ಕೆ ಈ ವರ್ಷ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಗಣನೀಯ ಕೃಷಿ ಮಾಡಿರುವ ಶ್ರೀಮತಿ ಬಾನುಮುಷ್ತಾಕ್ ಅವರನ್ನು ಡಾ॥ ಬೈರಮಂಗಲ ರಾಮೇಗೌಡ, ಡಾ.ಎನ್.ಆರ್. ಲಲಿತಾಂಬ ಮತ್ತು ಡಾ॥ ಜಿ.ಬಿ. ಹರೀಶ್ ಅವರನ್ನೊಳಗೊಂಡ ಆಯ್ಕೆ ಸಮಿತಿಯು ಸರ್ವಾನುಮತದಿಂದ ಆಯ್ಕೆ ಮಾಡಿದೆ. ಪುರಸ್ಕಾರ ನಗದು 30,000/– (ಮೂವತ್ತು ಸಾವಿರ ರೂಪಾಯಿಗಳು) ರೂ. ಮತ್ತು ಫಲಕವನ್ನು ಒಳಗೊಂಡಿರುತ್ತದೆ. ಈ ಪುರಸ್ಕಾರ ಪ್ರದಾನ ಸಮಾರಂಭ ದಿನಾಂಕ 19–09–2015ರಂದು ಶನಿವಾರ ಸಂಜೆ 5.30 ಗಂಟೆಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಂ.ವಿ.ಸೀ. ಸಭಾಂಗಣದಲ್ಲಿ ನಡೆಯಲಿದೆ.ಕರ್ನಾಟಕ ನಾಟಕ ಅಕಾಡೆಮಿಯ ಮಾಜಿ ಅಧ್ಯಕ್ಷರೂ ಖ್ಯಾತ ವಿಮರ್ಶಕರೂ ಆದ ಡಾ॥ ಕೆ.ಮರುಳಸಿದ್ದಪ್ಪನವರು ಅಧ್ಯಕ್ಷತೆಯನ್ನು ವಹಿಸಿ ಪ್ರಶಸ್ತಿ ಪ್ರದಾನವನ್ನು ಮಾಡಲಿದ್ದಾರೆ.

**ಶ್ರೀಮತಿಬಾನು ಮುಷ್ತಾಕ್**ಅವರ ವಿವರ

ಹೆಸರು : ಬಾನು ಮುಷ್ತಾಕ್

ವಿದ್ಯಾರ್ಹತೆ : ಬಿ.ಎಸ್ಸಿ., ಎಲ್.ಎಲ್.ಬಿ.

ಸಾರ್ವಜನಿಕ ಸೇವೆಯ ವಿವರಗಳು : ಹಾಸನ ನಗರ ಸಭೆಗೆ ಎರಡು ಅವಧಿಗೆ ಆಯ್ಕೆ,

ಹಾಸನದ ಜಿಲ್ಲಾ ಶ್ರೀ ಚಾಮ ರಾಜೇಂದ್ರ ಆಸ್ಪತ್ರೆಯಲ್ಲಿ ಸಂದರ್ಶಕರ ಮಂಡಳಿಯ ಅಧ್ಯಕ್ಷೆ,

ರಾಜ್ಯ ಗ್ರಂಥಾಲಯ ಪ್ರಾಧಿಕಾರದ ಸದಸ್ಯೆ. ಆಕಾಶವಾಣಿ ಬೆಂಗಳೂರು ಕೇಂದ್ರದ ಸಲಹಾ ಮಂಡಳಿ ಸದಸ್ಯೆ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯೆ,

ಕೇಂದ್ರ ಸಾಹಿತ್ಯ ಅಕಾಡೆಮಿಯ ಸಲಹಾ ಸಮಿತಿಯ ಸದಸ್ಯೆ, ಕನ್ನಡ ಸಾಹಿತ್ಯ ಪರಿಷತ್ತಿನ ರಾಜ್ಯ ಸಮಿತಿಯ ಕಾರ್ಯಕಾರಿ ಸಮಿತಿಯ ಸದಸ್ಯೆ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಜಿಲ್ಲಾ ಸಮಿತಿಯ ಸದಸ್ಯೆ, ಕನ್ನಡ ಚಲನ ಚಿತ್ರಗಳ ಸಬ್ಸಿಡಿ ಸಮಿತಿ ಸದಸ್ಯೆ, ಹಾಸನ ಜಿಲ್ಲಾ 10ನೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷೆ 2008.

**ವೃತ್ತಿ** : ಲಂಕೇಶ್ ಪತ್ರಿಕೆಯ ಜಿಲ್ಲಾ ವರದಿಗಾರ್ತಿ ನಂತರ 1990ರಿಂದ ನ್ಯಾಯವಾದಿ

**ಸಾಹಿತ್ಯ ಕ್ಷೇತ್ರ**

ಆರು ಕಥಾ ಸಂಕಲನಗಳು, ಒಂದು ಕಾದಂಬರಿ, ಒಂದು ಲೇಖನ ಸಂಗ್ರಹ.ಒಂದು ಕಾನೂನು ಗ್ರಂಥ, ಒಂದು ಕಾವ್ಯ, ಹಲವಾರು ಲೇಖನಗಳು ಹಾಗೂ ಹಿಂದಿ, ಪಂಜಾಬಿ ಹಾಗೂ ಉರ್ದು ಕಥೆಗಳ ಅನುವಾದಗಳು. ಇವರ 'ಕರಿ ನಾಗರಗಳು 'ಎಂಬ ಸಣ್ಣ ಕಥೆ "ಹಸೀನಾ" ಎಂಬ ಹೆಸರಿನ ಚಲನಚಿತ್ರವಾಗಿದ್ದು, ಮೂರು ರಾಷ್ಟ್ರ ಪ್ರಶಸ್ತಿ ಪಡೆದಿದೆ

**ಪ್ರಶಸ್ತಿ ಮತ್ತು ಬಹುಮಾನಗಳು** : ರೇಡಿಯೋ ನಾಟಕಕ್ಕೆ 1999ರ ಇಂಟರ್

ನ್ಯಾಷನಲ್ ವಿಮೆನ್ ಫಾರ್ ರೇಡಿಯೋ ಅಂಡ್ ಟೆಲಿವಿಷನ್ ಬಹುಮಾನ, ಕರ್ನಾಟಕ ಲೇಖಕಿಯರ ಸಂಘದ ಗುಡಿ ಬಂಡೆ ಪೂರ್ಣಿಮಾ ಉದಯೋನ್ಮುಖ ಕವಯತ್ರಿ ಬಹುಮಾನ, ಕರ್ನಾಟಕ ಲೇಖಕಿಯರ ಸಂಘದ ವತಿಯಿಂದ ಎಚ್.ವಿ.ಸಾವಿತ್ರಮ್ಮ ದತ್ತಿ ನಿಧಿ ಬಹುಮಾನ, ಕರ್ನಾಟಕ ಸಾಹಿತ್ಯ ಅಕಾಡೆಮಿ ವತಿಯಿಂದ 1999ನೇ ಸಾಲಿನ ಸಣ್ಣಕಥೆ ಬಹುಮಾನ ಕರ್ನಾಟಕ ರಾಜ್ಯ ಪ್ರಶಸ್ತಿ, ಸುಧಾಮೂರ್ತಿ–2002 ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ–2004, 'ಕರ್ನಾಟಕ ಕಲ್ಪವಲ್ಲಿ' ಪ್ರಶಸ್ತಿ, 2006 ನೇ ಮಹಾಮಸ್ತಕಾಭಿಷೇಕದ ಅಖಿಲ ಭಾರತೀಯ ಜೈನ ಮಹಿಳಾ ಸಮ್ಮೇಳನದ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ 2010ನೇ ವರ್ಷದ ಪದ್ಮ ಭೂಷಣ ಬಿ. ಸರೋಜಾದೇವಿ ಪ್ರಶಸ್ತಿ, ದಾವಣೆಗೆರೆಯ ಬಸವ ಕೇಂದ್ರದಿಂದ 2013ರ ಶೂನ್ಯ ಪೀಠ ಅಕ್ಕನಾಗಮ್ಮ ಪ್ರಶಸ್ತಿ, ಮುಂಬೈ ಕರ್ನಾಟಕ ಸಂಘದ ವತಿಯಿಂದ 2014ರ ಡಾ॥ಸುನೀತ ಶೆಟ್ಟಿ ಸಾಹಿತ್ಯ ಕರ್ನಾಟಕ ಸರ್ಕಾರದ ಅಡ್ವೋಕೇಟ್ ಜನರಲ್‌ರವರ ಕಛೇರಿಯಿಂದ 2014ರ ಜೀವ ಮಾನದ ಸಾಧನೆ ಪ್ರಶಸ್ತಿ, ಕೇಂದ್ರ ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ ಹೊಯ್ಸಳ ಮಹೋತ್ಸವದ ಸಂದರ್ಭದಲ್ಲಿ ಶತಮಾನೋತ್ಸವ ಗೌರವ.

Regd. with RNI, New Delhi. KARKAN 24541 dated 08.12.2014

# ಪದಚರಿತೆ : ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

– ಡಾ|| ಪಿ.ವಿ. ನಾರಾಯಣ

ಅಗ್ಗ: ಈ ಶಬ್ದವು ಮೂರು ನೆಲೆಗಳಲ್ಲಿ ಬಳಕೆಯಾಗುತ್ತದೆ. "ಅಗ್ಗದ ಶೆಟ್ಟಿ ಮುಗ್ಗಿದ ಜೋಳ" ಎಂಬ ಗಾದೆಮಾತನ್ನು ಕೇಳಿರಬಹುದು.ಎಂದರೆ ಕಡಿಮೆ ಬೆಲೆಗೆ ಮಾರುವ ಎಂಬರ್ಥ ಇಲ್ಲಿದೆ.ಇದು ಮಾತು ವ್ಯಕ್ತಿತ್ವ ಮುಂತಾದವುಗಳ ಅಲ್ಪತೆಯನ್ನು ಸೂಚಿಸುವಾಗಲೂ ಬಳಸುತ್ತಾರೆ.ಇದೇ ಅರ್ಥದಲ್ಲಿ ಈ ಶಬ್ದವನ್ನು ತುಳುವಿನಲ್ಲಿಯೂ ಬಳಸುತ್ತಾರೆ.ತೆಲುಗಿನಲ್ಲಿ ಇದು ಅಗ್ಗಮು ಎಂದಾಗುತ್ತದೆ. ಈ ಅರ್ಥದಲ್ಲಿನ ಶಬ್ದ ದ್ರಾವಿಡ ಮೂಲದ್ದಿರಬಹುದೆ ಎಂಬ ಅನುಮಾನ ಮೂಡುತ್ತದೆ.ಆದರೆ ಸಂಸ್ಕೃತದ ಎರಡು ಪದಗಳು ಕನ್ನಡದಲ್ಲಿ 'ಅಗ್ಗ' ಎಂಬ ಒಂದೇ ರೂಪದಿಂದ ತದ್ಭವವಾಗಿದೆ.ಮೊದಲನೆಯದು 'ಅರ್ಘ' ಎಂಬುದು; ಇದಕ್ಕೆ ಸಂಸ್ಕೃತದಲ್ಲಿ ಬೆಲೆ ಎಂಬರ್ಥವಿದೆ.ಈ ಅರ್ಥವು ಹೀನಾರ್ಥಗೊಂಡು ಬೆಲೆಯಿಲ್ಲದ ಎಂಬ ಅರ್ಥವನ್ನು ಪಡೆದಿರಬಹುದು ಎಂಬ ಅನುಮಾನವೂ ಉಂಟಾಗುತ್ತದೆ.ಹೀನಾರ್ಥ ಎಂಬುದು ಶಬ್ದವೊಂದರ ಮೂಲಾರ್ಥ ಬದಲಾಗುವ ಒಂದು ಬಗೆಯ ಪ್ರಕ್ರಿಯೆ 'ಮಹಾ ದೊಡ್ಡ ಮನುಷ್ಯ' ಎನ್ನುವಾಗ ದೊಡ್ಡ ಎಂಬುದಕ್ಕೆ ಚಿಕ್ಕ ಎಂಬ ಅರ್ಥ ಪ್ರಾಪ್ತವಾಗುವಂತೆ ಇಲ್ಲಿಯೂ ಆಗುತ್ತದೆ.ಇದನ್ನು ಭಾಷಾವಿಜ್ಞಾನದಲ್ಲಿ (ಪೆಜೋರೆಟಿವ್ ಚೇಂಜ್) ಎನ್ನುತ್ತಾರೆ [ಇದಕ್ಕೆ ವಿರುದ್ಧವಾದ ಪ್ರಕ್ರಿಯೆ ಅಮೆಲಿಯೋರೇಟಿವ್ ಚೇಂಜ್].ಅಗ್ಗ ಎಂಬುದಕ್ಕೆ ಶ್ರೇಷ್ಠವಾದ ಎಂಬ ಅರ್ಥವೂ ಇದೆ.

ಅಗ್ಗ ಎಂಬುದು ಸಂಸ್ಕೃತದ ಮತ್ತೊಂದು ಪದ 'ಅಗ್ರ'ದ ತದ್ಭವವೂ ಹೌದು.ಅಗ್ರ ಎಂದರೆ ತುದಿ ಎಂದರ್ಥ.ಬಾಳೆಯೆಲೆಯ ತುದಿಯ ಬಾಗಿದ ಆಕಾರದ ಭಾಗವನ್ನು 'ಅಗ್ರ' ಎನ್ನುವುದು ಇದಕ್ಕೇ.ಹೀಗಾಗಿ ಎಲ್ಲಕ್ಕಿಂತ ತುದಿಯಲ್ಲಿರುವ ಅಥವಾ ಮೇಲಿರುವ ಎಂಬಂತೆ ಅರ್ಥವಿಸ್ತಾರಗೊಳುತ್ತದೆ.'ಅಗ್ರಜ' (ಮುಂದು, ಮೊದಲು ಹುಟ್ಟಿದವನು ಎಂದರೆ ಅಣ್ಣ) ಎಂಬ ಪದ ರೂಪುಗೊಂಡಿದೆ.

ಅಗ್ಗದಿಂದ ಅಗ್ಗಳ ಎಂಬ ಪದವೂ ಉಂಟಾಗುತ್ತದೆ; ಈ ಪದಕ್ಕೆ ಅತಿಶಯವಾದ ಎಂಬರ್ಥವಿದೆ. "ಅಗ್ಗಳಮೆಂಬುದೆ ಅಧಿಕಂ" ಎಂದು ಒಂದು ನಿಘಂಟು ಅರ್ಥ ಕೊಡುತ್ತದೆ.ಪ್ರಾಯಶಃ ಈ ಅರ್ಥದ ಕಾರಣದಿಂದ ಅಗ್ಗಳ, (ಈ ಹೆಸರಿನ ಹನ್ನೆರಡನೆಯ ಶತಮಾನದ ಹಳಗನ್ನಡ ಕವಿಯೊಬ್ಬನಿದ್ದಾನೇ; ಅವನ ಕೃತಿ 'ಚಂದ್ರಪ್ರಭಪುರಾಣ').ಅಗ್ಗಪ್ಪ, ಅಗ್ಗಪ್ಪಸೆಟ್ಟಿ ಎಂಬ ಅಂಕಿತನಾಮಗಳೂ ಸಿಗುತ್ತವೆ.

## ಹಸ್ತಪ್ರತಿ ವಿಭಾಗ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗವು ಸತತವಾಗಿ ಕಾರ್ಯನಿರತವಾಗಿರುತ್ತದೆ. ನಮ್ಮಲ್ಲಿರುವ ಅಪಾರ ಸಂಖ್ಯೆಯ ಹಸ್ತಪ್ರತಿಗಳಿಗೆ ಸಂಬಂಧಿಸಿದಂತೆ ಹಲವಾರು ಚಟುವಟಿಕೆಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗುತ್ತಿದೆ. 2015ರ ಆಗಸ್ಟ್ ತಿಂಗಳಿನಲ್ಲಿ 4 ಗ್ರಂಥಗಳ ಶುಷ್ಕ ಶುದ್ಧೀಕರಣ, 12 ಗ್ರಂಥಗಳಿಗೆ ತೈಲ ಲೇಪನ ಮತ್ತು ಮಸಿ ಲೇಪನ, 33 ಗ್ರಂಥಗಳಲ್ಲಿ ಪತ್ರಗಳ ಜೋಡಣೆ, ಸ್ಕಾನ್ ಮಾಡಲು ಸಿದ್ಧಪಡಿಸಿರುವುದು , 19 ಗ್ರಂಥಗಳಿಗೆ ಸೂಚಿಗಳನ್ನು ತಯಾರಿಸಿರುವುದು, 19 ಗ್ರಂಥಗಳಿಗೆ ಅಟ್ಟೆ ಕಟ್ಟಿರುವುದು ಮತ್ತು 5 ಗ್ರಂಥಗಳಿಗೆ ಬಟ್ಟೆ ಕಟ್ಟಿರುವುದು ಈ ಎಲ್ಲಾ ಕೆಲಸಗಳನ್ನು ಮಾಡಿರಲಾಗಿರುತ್ತದೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

*ಶ್ರೀಮತಿ/ಶ್ರೀ*..........................................................................

..........................................................................................

..........................................................................................

*ವಿಳಾಸ*
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೪೮೭೭